# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 361 |
| ಸದಸ್ಯರ ಹೆಸರು | ಶ್ರೀ ಎಸ್.ವ್ಹಿ. ಸಂಕನೂರ (ಪದವೀಧರರ ಕ್ಷೇತ್ರ) |
| ಉತ್ತರಿಸುವ ದಿನಾಂಕ | 18-07-2019 |
| ಉತ್ತರಿಸುವ ಸಚಿವರು | ಮಾನ್ಯ ಮುಖ್ಯಮಂತ್ರಿಯವರು |

| ಕ್ರ.ಸಂ. | ಪ್ರಶ್ನೆ | ವಿವರ |
|---|---|---|
| ಅ) | 01-07-1984ರ ನಂತರ ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ದಿನಗೂಲಿ ನೌಕರರಾಗಿ ಸೇರಿದ್ದ ನೌಕರರಿಗೆ ಸುಪ್ರೀಂಕೋರ್ಟ್ ಆದೇಶ ಸಂಖ್ಯೆ: ಸಿಎ ನಂ.3595-3612/1999. ದಿನಾಂಕ: 10-04-2006 ರಂತೆ ಸಕ್ರಮಾತಿಗೆ ನಿಗದಿಪಡಿಸಿದ್ದ ಮಾನದಂಡಗಳೇನು; | ದಿನಾಂಕ 10-04-2006ರ ಮಾನ್ಯ ಸರ್ವೋಚ್ಛ ನ್ಯಾಯಾಲಯದ ಆದೇಶದನ್ವಯ ಘನ ಸರ್ಕಾರವು ದಿನಾಂಕ 25-05-2006ರ ಸುತ್ತೋಲೆಯಲ್ಲಿ ಸಕ್ರಮಾತಿಗೆ ನಿಗದಿಪಡಿಸಿದ ಮಾನದಂಡಗಳು ಕೆಳಗಿನಂತಿವೆ:<br>1) ದಿನಗೂಲಿ ನೌಕರರನ್ನು ಮೂಲತಃ ಮಂಜೂರಾದ ಖಾಲಿ ಹುದ್ದೆಯಲ್ಲಿ ನೇಮಕ ಮಾಡಿರಬೇಕು.<br>2) ಹೀಗೆ ದಿನಗೂಲಿ ನೌಕರರನ್ನು ನೇಮಕ ಮಾಡುವಾಗ ಅವರು ಸಂಬಂಧಿತ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದಿರಬೇಕು.<br>3) ಹೀಗೆ ನೇಮಕಗೊಂಡ ದಿನಗೂಲಿ ನೌಕರರು 10 ವರ್ಷಗಳಿಗೂ ಹೆಚ್ಚಿನ ಅವಧಿಗೆ ಸತತವಾಗಿ ಅದೇ ಹುದ್ದೆಯಲ್ಲಿ ಕಾರ್ಯ ನಿರ್ವಹಿಸಿರಬೇಕು.<br>4) ಸದರಿ ನೌಕರರು ನ್ಯಾಯಾಲಯಗಳ ಅಥವಾ ನ್ಯಾಯ ಮಂಡಳಿಗಳ ತಡೆಯಾಜ್ಞೆಗೆ ಒಳಪಟ್ಟು 10 ವರ್ಷಗಳಿಗೂ ಹೆಚ್ಚಿನ ಅವಧಿಗೆ ಮುಂದುವರೆದಿರಬಾರದು. |
| ಆ) | ಈ ಆದೇಶದ ಪ್ಯಾರಾ ನಂ.46 ರಲ್ಲಿ ವಾಣಿಜ್ಯ ತೆರಿಗೆ ಇಲಾಖೆಗೆ ನಿರ್ದಿಷ್ಟವಾಗಿ ನಿಗದಿಪಡಿಸಲಾಗಿದ್ದ ಮಾನದಂಡಗಳ ವಿರುದ್ಧವಾಗಿ ಸಕ್ರಮಾತಿ ಮಾಡಲಾಗಿದೆಯೇ; ಮಾಡಿದ್ದಲ್ಲಿ, ಕಾರಣಗಳೇನು; | ಮಾನ್ಯ ಸರ್ವೋಚ್ಛ ನ್ಯಾಯಾಲಯವು ಸಿವಿಲ್ ಅಪೀಲ್ ಸಂಖ್ಯೆ: 3595-3612/1999 ಹಾಗೂ ಇತರೆ ಅಪೀಲ್‌ಗಳ ಅಡಿ ದಿನಾಂಕ 10-04-2006 ರಲ್ಲಿ ನೀಡಿರುವ ತೀರ್ಪಿನಲ್ಲಿ ಸಕ್ರಮಾತಿಗೆ ನಿಗದಿಪಡಿಸಿದ್ದ ಮಾನದಂಡಗಳ ಅನ್ವಯ ಇಲಾಖೆಯಲ್ಲಿ ಸಕ್ರಮಾತಿಗೊಳಿಸಲಾಗಿದೆ. |

| | | |
|---|---|---|
| ಇ) | ಸಕ್ರಮಾತಿಯಲ್ಲಿ 10-04-2006ರ ತೀರ್ಪಿನ ಉಲ್ಲಂಘನೆಯಾಗಿದ್ದು, ಇದನ್ನು ಸರಿಪಡಿಸುವ ಬಗ್ಗೆ ಆರ್ಥಿಕ ಇಲಾಖೆಯ ನಂ. ಆಇ 97 ವಾತೆಸಿ 2008, ದಿನಾಂಕ 22-04-2008 ರಂದು ಪತ್ರ ಬರೆದಿದೆಯೇ; ಹಾಗಿದ್ದಲ್ಲಿ, ಸರಿಪಡಿಸಲು ಕೈಗೊಂಡ ಕ್ರಮ ಹಾಗೂ ಪತ್ರದ ಪ್ರತಿ ನೀಡುವುದು; | ದಿನಗೂಲಿ ನೌಕರರನ್ನು ಸಕ್ರಮ ಮಾಡಿರುವ ಬಗ್ಗೆ ಪುನರ್ ಪರಿಶೀಲನೆ ಮಾಡಲು ವಾಣಿಜ್ಯ ತೆರಿಗೆ ಇಲಾಖೆಗೆ ದಿನಾಂಕ 22-04-2008ರ ಪತ್ರವನ್ನು ಬರೆಯಲಾಗಿರುತ್ತದೆ. ದಿನಗೂಲಿ ನೌಕರರನ್ನು ಸಕ್ರಮಾತಿ ಮಾಡಿರುವ ಸಂದರ್ಭದಲ್ಲಿ ಯಾವುದೇ ಷರತ್ತಿನ ಉಲ್ಲಂಘನೆಯಾಗಿಲ್ಲವೆಂಬ ಬಗ್ಗೆ ಆಯುಕ್ತರಿಂದ ದಿನಾಂಕ 26-12-2008ರ ಪತ್ರದಲ್ಲಿ ಮಾಹಿತಿಯನ್ನು ಸಲ್ಲಿಸಿರುತ್ತಾರೆ. (ಪ್ರತಿಯನ್ನು ಲಗತ್ತಿಸಿದೆ) |
| ಈ) | ಸುಪ್ರೀಂಕೋರ್ಟ್ ಆದೇಶ ಉಲ್ಲಂಘಿಸಿ ದಿನಗೂಲಿ ನೌಕರರಿಗೆ ಹಿಂದಿನ ದಿನಾಂಕಕ್ಕೆ ಜೇಷ್ಠತೆಯನ್ನು ನಿಗದಿಪಡಿಸಿ ಸಕ್ರಮಾತಿ ಮಾಡಿರುವ ಲೋಪವನ್ನು ಸರಿಪಡಿಸಬೇಕೆಂದು ಪ್ರಕರಣ ಸಂಖ್ಯೆ: 131/2016(ಸೇವೆ)ರಲ್ಲಿ ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಬುಡಕಟ್ಟುಗಳ ಆಯೋಗದಿಂದ ತೀರ್ಪು ನೀಡಿರುವುದು ನಿಜವೇ; (ಇದ್ದಲ್ಲಿ, ತೀರ್ಪಿನ ಪ್ರತಿ ಒದಗಿಸುವುದು) | ಹೌದು, ಲಗತ್ತಿಸಿದೆ |
| ಉ) | ಸದರಿ ಆಯೋಗದ ತೀರ್ಪಿನನ್ವಯ ಕ್ರಮ ಕೈಗೊಳ್ಳಲು ವಾಣಿಜ್ಯ ತೆರಿಗೆ ಇಲಾಖೆಯು ಯಾವ ದಿನಾಂಕದಂದು ಆರ್ಥಿಕ ಇಲಾಖೆಗೆ ಅಭಿಪ್ರಾಯ ಕೋರಿದೆ; ಅಭಿಪ್ರಾಯ ನೀಡಲು ವಿಳಂಬವಾಗುತ್ತಿರಲು ಕಾರಣಗಳೇನು; ಯಾವ ಕಾಲಮಿತಿಯೊಳಗೆ ಅಭಿಪ್ರಾಯ ನೀಡಿ ನೇರ ನೇಮಕಾತಿಯಾದ ನೌಕರರಿಗೆ ನ್ಯಾಯವನ್ನು ಒದಗಿಸಲಾಗುವುದು? (ಪ್ರತಿ ನೀಡುವುದು) | ವಾಣಿಜ್ಯ ತೆರಿಗೆ ಇಲಾಖೆಯು ದಿನಾಂಕ 31-03-2018, 27-04-2018 ಮತ್ತು 14-01-2019ರ ಪತ್ರಗಳ ಮುಖೇನ ಆಯೋಗದ ತೀರ್ಪಿನ ಬಗ್ಗೆ ಅಭಿಪ್ರಾಯ ಕೋರಿರುತ್ತದೆ. ಆಯೋಗದ ತೀರ್ಪಿನ ಕುರಿತಂತೆ ಸಿ.ಆ.ಸು. ಇಲಾಖೆ (ಸೇವಾ ನಿಯಮಗಳು) ಯೊಂದಿಗೆ ಸಮಾಲೋಚಿಸಲಾಗಿ, ಕೆಲವೊಂದು ಮಾಹಿತಿಯನ್ನು ಒದಗಿಸುವಂತೆ ಸೂಚಿಸಿದ್ದರ ಮೇರೆಗೆ ಮಾಹಿತಿಯೊಂದಿಗೆ ಅಭಿಪ್ರಾಯಕ್ಕಾಗಿ ಕಡತವನ್ನು ಸಿ.ಆ.ಸು. ಇಲಾಖೆಗೆ ಮತ್ತೊಮ್ಮೆ ಸಲ್ಲಿಸಿದ್ದು, ಅಭಿಪ್ರಾಯವನ್ನು ನಿರೀಕ್ಷಿಸಲಾಗಿದೆ. |

ಆಇ 15 ವಾತೆಇ 2019

(ಹೆಚ್.ಡಿ. ಕುಮಾರಸ್ವಾಮಿ)
ಮುಖ್ಯ ಮಂತ್ರಿ

(17) 5



ಕರ್ನಾಟಕ ಸರ್ಕಾರ

(ವಾಣಿಜ್ಯ ತೆರಿಗೆ ಇಲಾಖೆ)

ಸಂಖ್ಯೆ:ಸಿಬ್ಬಂದಿ/2ಡಿ/ಸಿಆರ್.-44/2005-06

ವಾಣಿಜ್ಯ ತೆರಿಗೆ ಆಯುಕ್ತರ ಕಚೇರಿ,
ವಾಣಿಜ್ಯ ತೆರಿಗೆ ಕಾರ್ಯಾಲಯ-1,
ಗಾಂಧಿನಗರ, ಬೆಂಗಳೂರು. ದಿ:26.12.2008.

ಇವರಿಗೆ:
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
(ಆರ್ಥಿಕ ಇಲಾಖೆ), ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ವಾಣಿಜ್ಯ ತೆರಿಗೆ ಇಲಾಖೆಯ ದಿನಗೂಲಿ ನೌಕರರನ್ನು ಸಕ್ರಮ ಮಾಡಿರುವ ವಿಷಯದಲ್ಲಿ ವಿವರವಾದ ವರದಿ ಸಲ್ಲಿಸುವ ಬಗ್ಗೆ.

ಉಲ್ಲೇಖ: 1) ಸುಪ್ರೀಮ್ ಕೋರ್ಟ್ ತೀರ್ಪಿನ ದಿ:10.04.2006.
2) ರಾಜ್ಯ ಸರ್ಕಾರದ ಸುತ್ತೋಲೆ ಸಂ: ಸಿಆಸುಇ.25/ಸೇಸ್ಥೆಇ/2003 ದಿ:25.05.2006 ಮತ್ತು ದಿ:13.11.2006.
3) ವಾಣಿಜ್ಯ ತೆರಿಗೆ ಆಯುಕ್ತರ ಅಧಿಕೃತ ಜ್ಞಾಪನ ಪತ್ರ ಸಂ:ಸಿಬ್ಬಂದಿ/2ಡಿ/ಸಿಆರ್:44/2006-07 ದಿ:10.08.2006. ಪರಿಷ್ಕೃತ ಆದೇಶ ದಿ:06.01.2007.
4) ಸರ್ಕಾರದ ಪತ್ರ ಸಂ:ಎಫ್‌ಡಿ/97/ಸಿಎಸ್‌ಎಲ್/2008 ದಿ:22.04.2008.
5) ಕರ್ನಾಟಕ ಆಡಳಿತ ನ್ಯಾಯಮಂಡಳಿ ತೀರ್ಪಿನ ದಿ:29.11.2007.

* * * * * * * * * * *

ಮೇಲಿನ ವಿಷಯ ಹಾಗೂ ಉಲ್ಲೇಖಕ್ಕೆ ಸಂಬಂಧಪಟ್ಟಂತೆ, ದಿನಾಂಕ 10-4-2006ರ ಸುಪ್ರೀಮ್ ಕೋರ್ಟ್ ತೀರ್ಪಿನ ನಂತರ, ಸರ್ಕಾರ ಮೇಲಿನ ಉಲ್ಲೇಖ 2ರ ಸುತ್ತೋಲೆಗಳನ್ನು ಹೊರಡಿಸಿದ್ದು, ಅದರಲ್ಲಿ ಈ ಕೆಳಕಂಡ ನಾಲ್ಕು ಷರತ್ತುಗಳನ್ನು ಪೂರೈಸಿದ ದಿನಗೂಲಿ ನೌಕರರನ್ನು ಸಕ್ರಮ ಮಾಡಬಹುದೆಂದು ಸ್ಪಷ್ಟವಾಗಿ ಆದೇಶ ನೀಡಿರುತ್ತದೆ. ಸುತ್ತೋಲೆಯ ಷರತ್ತುಗಳನ್ನು ಪೂರೈಸಿದ್ದರಿಂದ ಮೇಲಿನ ಉಲ್ಲೇಖ 3ರ ಆದೇಶಗಳನ್ನು ಹೊರಡಿಸಿ ಈ ಇಲಾಖೆಯ ದಿನಗೂಲಿ ನೌಕರರನ್ನು ಸಕ್ರಮ ಮಾಡಲಾಗಿದೆ. ನಂತರ ಉಲ್ಲೇಖ 4ರ ಸರ್ಕಾರದ ಪತ್ರದಲ್ಲಿ ದಿನಗೂಲಿ ನೌಕರರನ್ನು ಸಕ್ರಮ ಮಾಡಿರುವ ಬಗ್ಗೆ ಪುನರ್ ಪರಿಶೀಲನೆ ಮಾಡಲು ಸೂಚಿಸಲಾಗಿದೆ.

ಉಲ್ಲೇಖ 4ರ ಸರ್ಕಾರದ ಪತ್ರದ ಪ್ರಕಾರ, ಇಲಾಖೆಯ ದಿನಗೂಲಿ ನೌಕರರನ್ನು ಸಕ್ರಮ ಮಾಡಿರುವ ಬಗ್ಗೆ ದಾಖಲೆಗಳ ಸಹಿತ ಪುನರ್ ಪರಿಶೀಲನೆ ಮಾಡಿ ಈ ಕೆಳಕಂಡ ವಿವರವಾದ ವರದಿ ಸಲ್ಲಿಸಲಾಗಿದೆ.

ಸರ್ಕಾರದ ಸುತ್ತೋಲೆಯಲ್ಲಿ ನಮೂದಿಸಿರುವ 4 ಷರತ್ತುಗಳನ್ನು ಇಲಾಖೆಯ ದಿನಗೂಲಿ ನೌಕರರು ಈ ಕೆಳಕಂಡಂತೆ ದಾಖಲೆಗಳ ಸಹಿತ ಪೂರೈಸಿರುತ್ತಾರೆ.

ಸರ್ಕಾರದ ಸುತ್ತೋಲೆಯಲ್ಲಿ ನಮೂದಿಸಿರುವ ಷರತ್ತುಗಳು ಹಾಗೂ ಇಲಾಖೆಯ ದಿನಗೂಲಿ ನೌಕರರು ಅವುಗಳನ್ನು ಪೂರೈಸಿರುವ ವಿವರ

| ಸರ್ಕಾರದ ಸುತ್ತೋಲೆಯಲ್ಲಿ ವಿಧಿಸುವ ಷರತ್ತುಗಳು | ವಾಣಿಜ್ಯ ತೆರಿಗೆ ಇಲಾಖೆ ದಿನಗೂಲಿ ನೌಕರರು ಸದರಿ ಷರತ್ತುಗಳನ್ನು ಪೂರೈಸಿರುವ ವಿವರ |
|---|---|
| (1) ದಿನಗೂಲಿ ನೌಕರರು ಮೂಲತಃ ಮಂಜೂರಾದ ಖಾಲಿ ಹುದ್ದೆಯಲ್ಲಿ ನೇಮಕ ಮಾಡಿರಬೇಕು. | ಕರ್ನಾಟಕ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠ ವಾಣಿಜ್ಯ ತೆರಿಗೆ ಇಲಾಖೆಯ ದಿನಗೂಲಿ ನೌಕರರಾದ ಶ್ರೀಮತಿ ಉಮಾದೇವಿ ಮತ್ತು ಇತರರ ಪ್ರಕರಣದಲ್ಲಿ ದಿನಾಂಕ 11-9-1998ರಂದು ನೀಡಿದ ತೀರ್ಪಿನ WA 3190-3207/98ರ ಪುಟ ಸಂಖ್ಯೆ 16 ಮತ್ತು 17ರಲ್ಲಿ ಹಾಗೂ ಇದೇ ಇಲಾಖೆಯ ಗಣೇಶ್ ರಾವ್ ಪ್ರಕರಣದ WA 1592-1638/2000ರ ಪುಟ ಸಂಖ್ಯೆ 23ರಲ್ಲಿ ವಾಣಿಜ್ಯ ತೆರಿಗೆ ಇಲಾಖೆಯ ದಿನಗೂಲಿ ನೌಕರರು ಪ್ರಾರಂಭದಿಂದಲೂ ಇಲಾಖೆಯಲ್ಲಿ ಖಾಲಿಯಿದ್ದ ಹುದ್ದೆಗಳಿಗೆ ಆಯ್ಕೆಯಾಗಿದ್ದಾರೆ ಎಂದು ಉಚ್ಚ ನ್ಯಾಯಾಲಯ ಸ್ಪಷ್ಟವಾಗಿ ತೀರ್ಮಾನ ನೀಡಿರುವುದರಿಂದ, ಈ ಷರತ್ತನ್ನು ಸದರಿ ನೌಕರರು ಪೂರೈಸಿದಂತಾಗುತ್ತದೆ. |
| (2) ಹೀಗೆ ದಿನಗೂಲಿ ನೌಕರರನ್ನು ನೇಮಕ ಮಾಡುವಾಗ ಅವರು ಸಂಬಂಧಿತ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದಿರಬೇಕು | ಇಲಾಖೆಯಲ್ಲಿ ಶೀಘ್ರಲಿಪಿಗಾರರು, ಬೆರಳಚ್ಚುಗಾರರು ಮತ್ತು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಲ್ಲಿ ದಿನಗೂಲಿ ನೌಕರರಿದ್ದು, ಎಲ್ಲಾ ದಿನಗೂಲಿ ನೌಕರರು ಆಯಾ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದಿದ್ದಾರೆ. ಇದರಿಂದ ಸದರಿ ನೌಕರರು ಈ ಷರತ್ತನ್ನು ಪೂರೈಸಿದಂತಾಗುತ್ತದೆ. |
| (3) ಹೀಗೆ ನೇಮಕಗೊಂಡ ದಿನಗೂಲಿ ನೌಕರರು 10 ವರ್ಷಗಳಿಗೂ ಹೆಚ್ಚಿನ ಅವಧಿಗೆ ಸತತವಾಗಿ ಅದೇ ಹುದ್ದೆಯಲ್ಲಿ ಕಾರ್ಯ ನಿರ್ವಹಿಸಿರಬೇಕು. | ಇಲಾಖೆಯ ಎಲ್ಲಾ ದಿನಗೂಲಿ ನೌಕರರು ಸತತ 10 ವರ್ಷಕ್ಕಿಂತ ಹೆಚ್ಚಿನ ಅವಧಿಯ ಸೇವೆಯನ್ನು ಅವರು ನೇಮಕಗೊಂಡ ಹುದ್ದೆಗಳಲ್ಲಿ ಯಾವುದೇ ಅಡೆ ತಡೆ ಇಲ್ಲದೆ ಕಾರ್ಯ ನಿರ್ವಹಿಸಿದ್ದಾರೆ. |
| (4) ಸದರಿ ನೌಕರರು ನ್ಯಾಯಾಲಯಗಳ ಅಥವಾ ನ್ಯಾಯ ಮಂಡಳಿಗಳ ತಡೆಯಾಜ್ಞೆಗೆ ಒಳಪಟ್ಟು 10 ವರ್ಷಗಳಿಗೂ ಹೆಚ್ಚಿನ ಅವಧಿಗೆ ಮುಂದುವರಿದಿರಬಾರದು. | ಇದುವರೆಗೆ ಇಲಾಖೆಯ ದಿನಗೂಲಿ ನೌಕರರಿಗೆ ಯಾವುದೇ ನ್ಯಾಯಾಲಯ ತಡೆಯಾಜ್ಞೆ ನೀಡಿರುವುದಿಲ್ಲ. ದಿನಾಂಕ 31-3-1990 ರಂದೆ ಇಲಾಖೆ ದಿನಗೂಲಿ ನೌಕರರು ಸಕ್ರಮಕ್ಕಾಗಿ ಪ್ರತ್ಯೇಕವಾಗಿ ಸುಪ್ರೀಮ್ ಕೋರ್ಟಿಗೆ ಅರ್ಜಿ ಸಲ್ಲಿಸಿದ್ದರು WP 404/90. ಆದ್ದರಿಂದ WP8192/90 ದಿನಾಂಕ 11-4-90 ಮತ್ತು WP12610/93 ದಿನಾಂಕ 23-4-1993 ರಂದು ಉಚ್ಚ ನ್ಯಾಯಾಲಯ ನೀಡಿರುವ ತಡೆಯಾಜ್ಞೆ |

| | |
|---|---|
| | ಇಲಾಖೆಯ ದಿನಗೂಲಿ ನೌಕರರಿಗೆ ಅನ್ವಯವಾಗುವುದಿಲ್ಲ ಅದು ಸಂಪೂರ್ಣವಾಗಿ ಹುಬ್ಬಳ್ಳಿ ಪ್ರಕರಣಕ್ಕೆ ಸಂಬಂಧಪಟ್ಟಿರುತ್ತದೆ ಅಲ್ಲದೆ ಈ ಎರಡು ರಿಟ್ ಅರ್ಜಿಗಳು ಇತ್ಯರ್ಥವಾಗಿ ಉಚ್ಚ ನ್ಯಾಯಾಲಯವೇ ಜಿಲ್ಲಾ ಪರಿಷತ್‌ಗಳು ಮತ್ತು ಇತರ 23 ಇಲಾಖೆಗಳಿಗೆ ದಿನಾಂಕ 22-9-1998ರಂದು ಪ್ರತ್ಯೇಕವಾಗಿ ಅಂತಿಮ ತೀರ್ಪು ನೀಡಿದೆ.<br><br>ಆದರೆ ಇದಕ್ಕೂ ಒಂದು ವಾರ ಮುನ್ನ ಇದೇ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠ ವಾಣಿಜ್ಯ ತೆರಿಗೆ ಇಲಾಖೆಯ ದಿನಗೂಲಿ ನೌಕರರಾದ ಶ್ರೀಮತಿ ಉಮಾದೇವಿ ಮತ್ತು ಇತರರ ಪರವಾಗಿ ದಿನಾಂಕ 11-9-1998ರಂದು (WA 3190-3207/98) ಪ್ರತ್ಯೇಕವಾಗಿ ತೀರ್ಪು ನೀಡಿದೆ.<br><br>ಅಲ್ಲದೆ ವಾಣಿಜ್ಯ ತೆರಿಗೆ ಇಲಾಖೆಯ ದಿನಗೂಲಿ ನೌಕರರಾದ ಗಣೇಶ್ ರಾವ್ ಪ್ರಕರಣದ WA 1592-1638/2000 ಮತ್ತು ಹುಬ್ಬಳ್ಳಿ ಪ್ರಕರಣ WA 120/1999 ಎರಡು ಪ್ರಕರಣಗಳು ಉಚ್ಚ ನ್ಯಾಯಾಲಯದ ಒಂದೇ ವಿಭಾಗೀಯ ಪೀಠದ ಮುಂದೆ ಇದ್ದಂತಹ ಸಂದರ್ಭದಲ್ಲಿ ಸದರಿ ಪೀಠವು ದಿನಾಂಕ 31-8-2000ರಂದು ಹುಬ್ಬಳ್ಳಿ ಪ್ರಕರಣದಿಂದ ವಾಣಿಜ್ಯ ತೆರಿಗೆ ಇಲಾಖೆ ಪ್ರಕರಣವನ್ನು ಪ್ರತ್ಯೇಕ ಮಾಡಿ ಬೇರೆ ವಿಭಾಗೀಯ ಪೀಠಕ್ಕೆ ವರ್ಗಾವಣೆ ಮಾಡಿರುವುದರಿಂದ ಸರ್ಕಾರ ಸುತ್ತೋಲೆಯಲ್ಲಿ ನಮೂದಿಸಿರುವ 11-4-90 ಮತ್ತು 23-4-93ರ ತಡೆಯಾಜ್ಞೆಗಳು ಇಲಾಖೆಯ ದಿನಗೂಲಿ ನೌಕರರಿಗೆ ಸಂಬಂಧಪಟ್ಟಿರುವುದಿಲ್ಲ.<br><br>ಇದರಿಂದ ಇಲಾಖೆಯ ದಿನಗೂಲಿ ನೌಕರರು ಸುತ್ತೋಲೆಯ 4ನೇ ಷರತ್ತನ್ನು ಸ್ಪಷ್ಟವಾಗಿ ಪೂರೈಸಿದಂತಾಗುತ್ತದೆ ಮತ್ತು ದಿನಾಂಕ 10-8-2006( ಪರಿಷ್ಕೃತ ಆದೇಶ 6-1-2007) ರಂದು ಹೊರಡಿರುವ ಸಕ್ರಮ ಆದೇಶದಲ್ಲಿ ಸರ್ಕಾರದ ಸುತ್ತೋಲೆಯನ್ನು ಉಲ್ಲಂಘನೆ ಮಾಡಿರುವುದಿಲ್ಲ, |

ಮೇಲಿನ ಉಲ್ಲೇಖ 4 ರ ದಿನಾಂಕ 22-4-2008ರ ಸರ್ಕಾರದ ಪತ್ರದ ಪುಟ ಸಂಖ್ಯೆ 2 ರಲ್ಲಿ DPAR ಅಭಿಪ್ರಾಯ ಪಟ್ಟಿರುವಂತ ದಿನಗೂಲಿ ನೌಕರರ ಹುಬ್ಬಳ್ಳಿ ಸಂಘವು ಉಚ್ಚ ನ್ಯಾಯಾಲಯದ ದಿನಾಂಕ 1-2-2001ರ

(WA 120/1999) ತೀರ್ಪಿನ ವಿರುದ್ಧ ಸುಪ್ರೀಮ್ ಕೋರ್ಟಿಗೆ ಮೇಲ್ಮನವಿ ಸಲ್ಲಿಸಿದ್ದ C.A 1861-2063/2001 ನ್ನು ಸುಪ್ರೀಮ್ ಕೋರ್ಟ್ ತೀರ್ಪಿನ ಪ್ಯಾರ 49ರ ಅಂತಿಮ ಸಾಲಿನಲ್ಲಿ ಸಕ್ರಮಕ್ಕೆ ಸಂಬಂಧಿಸಿದ ಅರ್ಜಿಯನ್ನು ಸ್ಪಷ್ಟವಾಗಿ ತಿರಸ್ಕರಿಸಿದೆ.

ಅದೇ ವಾಣಿಜ್ಯ ತೆರಿಗೆ ಇಲಾಖೆಯ ಉಮಾದೇವಿ ಪ್ರಕರಣದಲ್ಲಿ ದಿನಾಂಕ 11-9-1998 ರಂದು (WA.3190-3207/1998) ಉಚ್ಚ ನ್ಯಾಯಾಲಯ ನೀಡಿದ್ದ ತೀರ್ಪಿನ ವಿರುದ್ಧ ಸರ್ಕಾರ ಸುಪ್ರೀಮ್ ಕೋರ್ಟಿಗೆ ಮೇಲ್ಮನವಿ ಸಲ್ಲಿಸಿದ್ದ C.A 3595-3612/1999ನ್ನು ಸುಪ್ರೀಮ್ ಕೋರ್ಟ್ ತೀರ್ಪಿನ ಪ್ಯಾರ 49ರಲ್ಲಿ, ಪ್ಯಾರ 44ರ ಸಾಮಾನ್ಯ ಷರತ್ತುಗಳಿಗೆ ಒಳಪಡಿಸಿ ಕ್ರಮ ತೆಗೆದುಕೊಳ್ಳಲು ನಿರ್ದೇಶನ ನೀಡಿದೆ.

ಪ್ಯಾರ 49ರಲ್ಲಿ ವಾಣಿಜ್ಯ ತೆರಿಗೆ ಇಲಾಖೆ ದಿನಗೂಲಿ ನೌಕರರಿಗೆ ವಿವರಣೆ ನೀಡಿದ್ದರೂ ಸಹಾ ಅಂತಿಮವಾಗಿ 44ರ ಪ್ರಕಾರ ಪರಿಗಣಿಸಬಹುದೆಂದು ಸೂಚಿಸಿದೆ. ಕೆಲವು ನೌಕರರನ್ನು ಪ್ಯಾರ 46ರ ಪ್ರಕಾರ ಮಾಡಿ ಇನ್ನು ಕೆಲವು ನೌಕರರನ್ನು ಪ್ಯಾರ 44ರಪ್ರಕಾರ ಮಾಡಿದರೆ ಸಮಾನತೆ ಎಂಬುದು ಕಂಡು ಬರುವುದಿಲ್ಲ. ಅದಕ್ಕಾಗಿ ಸರ್ಕಾರ ಸುತ್ತೋಲೆಯಲ್ಲಿ ವಾಣಿಜ್ಯ ತೆರಿಗೆ ಇಲಾಖೆಯ ದಿನಗೂಲಿ ನೌಕರರಿಗೆ ಪ್ರತ್ಯೇಕವಾಗಿ ಆದೇಶ ಹೊರಡಿಸಲು ನಿರ್ದೇಶನ ನೀಡಿರುವುದಿಲ್ಲ. ಆದ್ದರಿಂದ ಪ್ಯಾರ 44ರ ಷರತ್ತುಗಳನ್ನು ಪೂರೈಸುವ ಎಲ್ಲಾ ನೌಕರರನ್ನು ಸಕ್ರಮ ಮಾಡಬೇಕಾಗಿದೆ. ವಾಣಿಜ್ಯ ತೆರಿಗೆ ಇಲಾಖೆಯ ನೌಕರರು ಈ ಷರತ್ತುಗಳನ್ನು ಪೂರೈಸಿರುವುದರಿಂದ ದಿನಾಂಕ 10-8-2006 ( ಪರಿಷ್ಕೃತ ಆದೇಶ 6-1-2007) ರಂದು ಸದರಿ ನೌಕರರನ್ನು ಸಕ್ರಮ ಮಾಡಿರುವುದು ಸ್ಪಷ್ಟವಾಗಿದೆ. ಇದರಲ್ಲಿ ಸರ್ಕಾರದ ಸುತ್ತೋಲೆಯನ್ನು ಉಲ್ಲಂಘನೆ ಮಾಡಿದಂತಾಗುವುದಿಲ್ಲ. ಇದೇ ರೀತಿ ಸುತ್ತೋಲೆಯ ಷರತ್ತುಗಳನ್ನು ಪೂರೈಸಿದ, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಪೌರಾಡಳಿತ ಇಲಾಖೆ ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಮುಂತಾದ ಇಲಾಖೆಗಳಲ್ಲಿ ದಿನಗೂಲಿ ನೌಕರರನ್ನು ಸಕ್ರಮ ಮಾಡಲಾಗಿದೆ. ಒಮ್ಮೆ ದಿನಗೂಲಿ ನೌಕರರನ್ನು ಸಕ್ರಮ ಮಾಡಿದ ನಂತರ, ಸದರಿ ಆದೇಶವನ್ನು ವಾಪಸ್ ಪಡೆದರೆ ಸಂವಿಧಾನದ 311ನೇ ವಿಧಿಯನ್ನು ಉಲ್ಲಂಘನೆ ಮಾಡಿದಂತಾಗುತ್ತದೆ.

ದಿನಾಂಕ 6-1-2007ರಂದು ಪರಿಷ್ಕೃತ ಸಕ್ರಮ ಆದೇಶ ಹೊರಡಿಸಿದ ನಂತರ ಹಲವಾರು ನೌಕರರು ಬಾಕಿ ವೇತನಕ್ಕಾಗಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಗೆ ಅರ್ಜಿ ಸಲ್ಲಿಸಿದ್ದರು. ಆ ಸಂದರ್ಭದಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿ, ಇಲಾಖೆಯ ದಿನಗೂಲಿ ನೌಕರರನ್ನು ಸಕ್ರಮ ಮಾಡಿರುವ ಬಗ್ಗೆ ಯಾವುದೇ ಆಕ್ಷೇಪಣೆಯನ್ನು ಮಾಡಿರುವುದಿಲ್ಲ.

ಮೇಲ್ಕಂಡ ಎಲ್ಲಾ ವಿಷಯಗಳನ್ನು ದಾಖಲೆಗಳ ಸಹಿತ ಪುನರ್ ಪರಿಶೀಲನೆ ಮಾಡಿದಾಗ ಈ ಇಲಾಖೆಯ ದಿನಗೂಲಿ ನೌಕರರು ಸುತ್ತೋಲೆಯ 4 ಷರತ್ತುಗಳನ್ನು ಪೂರೈಸಿರುವುದರಿಂದ ಅವರನ್ನು ಸಕ್ರಮ ಮಾಡಿರುವುದು ಸ್ಪಷ್ಟವಾಗಿದೆ. ಆದ್ದರಿಂದ ಸದರಿ ಸಕ್ರಮ ಆದೇಶವನ್ನು ವಾಪಸ್ ಪಡೆಯುವ ಸಂಭವ ಉದ್ಭವಿಸುವುದಿಲ್ಲವೆಂದು ತಮಗೆ ಈ ಮೂಲಕ ವಿವರವಾದ ವರದಿಯನ್ನು ಸಲ್ಲಿಸಲಾಗಿದೆ. ಇದಕ್ಕೆ ಸಂಬಂಧಪಟ್ಟ ಪೂರಕ ದಾಖಲೆಗಳನ್ನು ಅಡಕಗೊಳಿಸಿ ಸಲ್ಲಿಸಲಾಗಿದೆ.

ವಾಣಿಜ್ಯ ತೆರಿಗೆ ಆಯುಕ್ತರು,
(ಕರ್ನಾಟಕ), ಗಾಂಧಿನಗರ, ಬೆಂಗಳೂರು.

ಅಡಕ: ಪುಟ 1 ರಿಂದ 58

ಅಡಕ: ಕೆಳಕಂಡ ಪೂರಕ ದಾಖಲೆಗಳು

1) ದಿನಾಂಕ: 09-09-1990 ರಂದು ವಾಣಿಜ್ಯ ತೆರಿಗೆ ಇಲಾಖೆಯ ದಿನಗೂಲಿ ನೌಕರರ ಪರವಾಗಿ ಪ್ರತ್ಯೇಕವಾಗಿ ಸರ್ವೋಚ್ಚ ನ್ಯಾಯಾಲಯ ನೀಡಿರುವ ತೀರ್ಪಿನ ಪ್ರತಿ (ಪುಟ ಸಂಖ್ಯೆ 1 ರಿಂದ 3 ವರೆಗೆ)
2) ದಿನಾಂಕ 11-04-1990 ರಂದು ಹುಬ್ಬಳ್ಳಿ ಪ್ರಕರಣಕ್ಕೆ ಪ್ರತ್ಯೇಕವಾಗಿ ಕರ್ನಾಟಕ ಉಚ್ಚ ನ್ಯಾಯಾಲಯ ನೀಡಿದ ತಡೆಯಾಜ್ಞೆ ಪ್ರತಿ (ಪುಟ ಸಂಖ್ಯೆ 4 ರಿಂದ 5 ವರೆಗೆ)
3) ದಿನಾಂಕ 23-04-1993 ರಂದು ಹುಬ್ಬಳ್ಳಿ ಪ್ರಕರಣಕ್ಕೆ ಪ್ರತ್ಯೇಕವಾಗಿ 23 ಇಲಾಖೆ ಹಾಗೂ ಜಿಲ್ಲಾಪರಿಷತ್‌ಗಳಿಗೆ ಕರ್ನಾಟಕ ಉಚ್ಚ ನ್ಯಾಯಾಲಯ ಪ್ರತ್ಯೇಕವಾಗಿ ನೀಡಿದ ತಡೆಯಾಜ್ಞೆ ಪ್ರತಿ (ಪುಟ ಸಂಖ್ಯೆ 6 ರಿಂದ 9 ವರೆಗೆ)
4) ದಿನಾಂಕ 11-09-1998 ರಂದು ವಾಣಿಜ್ಯ ತೆರಿಗೆ ಇಲಾಖೆಯ ಉಮಾದೇವಿ ಪ್ರಕರಣದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯ ವಿಭಾಗೀಯ ಪೀಠ ನೀಡಿದ ತೀರ್ಪಿನ ಪ್ರತಿ (ಪುಟ ಸಂಖ್ಯೆ 10 ರಿಂದ 15 ವರೆಗೆ)
5) ದಿನಾಂಕ 11-04-1990 ಮತ್ತು ದಿನಾಂಕ 23-04-1993ರ ತಡೆಯಾಜ್ಞೆಯ ಹುಬ್ಬಳ್ಳಿ ಪ್ರಕರಣದಲ್ಲಿ ಪ್ರತ್ಯೇಕವಾಗಿ 23 ಇಲಾಖೆಗಳಿಗೆ ಕರ್ನಾಟಕ ಉಚ್ಚ ನ್ಯಾಯಾಲಯದ ಏಕ ಪೀಠ ನೀಡಿದ ತೀರ್ಪಿನ ಪ್ರತಿ (ಪುಟ ಸಂಖ್ಯೆ 16 ರಿಂದ 22 ವರೆಗೆ)
6) ದಿನಾಂಕ 31-08-2000ರಂದು ವಾಣಿಜ್ಯ ತೆರಿಗೆ ಇಲಾಖೆಯ ಗಣೇಶ್‌ರಾವ್ ಪ್ರಕರಣವನ್ನು ಹುಬ್ಬಳ್ಳಿ ಪ್ರಕರಣದಿಂದ ಪ್ರತ್ಯೇಕ ಮಾಡಿ ಬೇರೆ ವಿಭಾಗೀಯ ಪೀಠಕ್ಕೆ ವರ್ಗಾವಣೆ ಮಾಡಿದ ಕರ್ನಾಟಕ ಉಚ್ಚ ನ್ಯಾಯಾಲಯ ವಿಭಾಗೀಯ ಪೀಠದ ಆದೇಶದ ಪ್ರತಿ (ಪುಟ ಸಂಖ್ಯೆ 23 ರಿಂದ 26 ವರೆಗೆ)
7) ದಿನಾಂಕ 01-02-2001 ರಂದು ಹುಬ್ಬಳ್ಳಿ ಪ್ರಕರಣದ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯ ವಿಭಾಗೀಯ ಪೀಠ ನೀಡಿದ ತೀರ್ಪಿನ ಪ್ರತಿ (ಪುಟ ಸಂಖ್ಯೆ 27 ರಿಂದ 30 ವರೆಗೆ)
8) ದಿನಾಂಕ 01-06-2001 ರಂದು ಉಚ್ಚ ನ್ಯಾಯಾಲಯದ ಮತ್ತೊಂದು ವಿಭಾಗೀಯ ಪೀಠ ವಾಣಿಜ್ಯ ತೆರಿಗೆ ಇಲಾಖೆಯ ದಿನಗೂಲಿ ನೌಕರರ ಪರವಾಗಿ ನೀಡಿದ ತೀರ್ಪಿನ ಪ್ರತಿ (ಪುಟ ಸಂಖ್ಯೆ 31 ರಿಂದ 35 ವರೆಗೆ)
9) ದಿನಾಂಕ 6-1-2007 ಪರಿಷ್ಕೃತ ಸಕ್ರಮ ಆದೇಶದ ನಂತರ ಕೆಲವು ನೌಕರರು ಕರ್ನಾಟಕ ಆಡಳಿತ ನ್ಯಾಯಮಂಡಳಿಗೆ ಸಲ್ಲಿಸಿದ್ದ ಅರ್ಜಿಯ ಆದೇಶದ ದಿನಾಂಕ-11-2007ರ ಪ್ರತಿ(ಪುಟ ಸಂಖ್ಯೆ 36 ರಿಂದ43 ವರೆಗೆ)
10) ದಿನಾಂಕ: 10-04-2006ರ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ನಂತರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ದಿನಗೂಲಿ ನೌಕರರನ್ನು ಸಕ್ರಮ ಮಾಡಿದ ಆದೇಶದ ಪ್ರತಿ (ಪುಟ ಸಂಖ್ಯೆ 44ರಿಂದ 45 ವರೆಗೆ)
11) ದಿನಾಂಕ: 10-04-2006ರ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ನಂತರ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯಲ್ಲಿ ದಿನಗೂಲಿ ನೌಕರನ್ನು ಸಕ್ರಮ ಮಾಡಿದ ಆದೇಶದ ಪ್ರತಿ (ಪುಟ ಸಂಖ್ಯೆ 46 ರಿಂದ 48 ವರೆಗೆ)
12) ದಿನಾಂಕ: 10-04-2006ರ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ನಂತರ ಪೌರಾಡಳಿತ ಇಲಾಖೆಯಲ್ಲಿ ದಿನಗೂಲಿ ನೌಕರರನ್ನು ಸಕ್ರಮ ಮಾಡಿದ ಆದೇಶದ ಪ್ರತಿ (ಪುಟ ಸಂಖ್ಯೆ 49 ರಿಂದ ವರೆಗೆ)
13) ಇಲಾಖೆಯ ದಿನಗೂಲಿ ನೌಕರರನ್ನು ಸಕ್ರಮ ಮಾಡಿರುವ ಬಗ್ಗೆ ಹಿರಿಯ ವಕೀಲರು ನೀಡಿರುವ ಕಾನೂನು ಸಲಹೆ ಪ್ರತಿ (ಪುಟ ಸಂಖ್ಯೆ 50 ರಿಂದ 58 ವರೆಗೆ)